CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೭, ೨೦೦೫ (ಚೈತ್ರ ೧೭, ಶಕ ವರ್ಷ ೧೯೨೬) | ಸಂಚಿಕೆ ೧೪ |
|---|---|---|

## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಇಡಿ 748 ಡಿಪಿಐ 2003, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2005**

ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಪದವಿಪೂರ್ವ ಶಿಕ್ಷಣ ಇಲಾಖೆಯ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ಖಾಲಿಯಿರುವ ರಾಜ್ಯಶಾಸ್ತ್ರ ವಿಷಯದ ಉಪನ್ಯಾಸಕರ ಬ್ಯಾಕ್‌ಲಾಗ್ ಹುದ್ದೆಗೆ ಮುಖ್ಯಪಟ್ಟಿಯಲ್ಲಿ ಆಯ್ಕೆಯಾಗಿರುವ ಶ್ರೀ ಆರ್. ದಕ್ಷಿಣಾಮೂರ್ತಿ, ಸಂಖ್ಯೆ: ಜಿ.50, ವಿ.ಐ.ಎಲ್. ಮುರುಗಪುರಂ, ಡಾ: ಟಿ.ಸಿ.ಎನ್. ರಾಯನ್ ರೋಡ್, ಬೆಂಗಳೂರು-560053 ಇವರನ್ನು ರೂ.6000-150-7200-200-8800-260-10880-320-11200ರ ವೇತನ ಶ್ರೇಣಿಯ ಉಪನ್ಯಾಸಕರ ಹುದ್ದೆಗೆ 2 ವರ್ಷಗಳ ಪರೀಕ್ಷಾರ್ಥಿಯಾಗಿ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಕಾತಿ ಮಾಡಿ ಸರ್ಕಾರಿ ಪದವಿಪೂರ್ವ ಕಾಲೇಜು, ವಿಜಯಪುರ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು:**

1. ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರುಗಳ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಾವಳಿಗಳಿಗೆ ಅಥವಾ ಆದೇಶಗಳಿಗೆ ಒಳಪಟ್ಟಿರುತ್ತದೆ.
2. ಸದರಿಯವರು 1977ರ ಕರ್ನಾಟಕ ನಾಗರೀಕ ಸೇವೆಗಳು (ಪರೀಕ್ಷಾರ್ಥ) ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
3. ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಯು 1974ರ ಕರ್ನಾಟಕ ನಾಗರೀಕ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿಗಳಲ್ಲಿ ಮೇಲ್ಕಂಡ ಹುದ್ದೆಗೆ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು, ಅಥವಾ ವಿನಾಯಿತಿ ಪಡೆಯತಕ್ಕದ್ದು.
4. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅವರ ಮೂಲ ಅಂಕಪಟ್ಟಿ ಪದವಿ ಪ್ರಮಾಣಪತ್ರ, ಜನ್ಮದಿನಾಂಕ, ಮೀಸಲಾತಿ ಪ್ರಮಾಣಪತ್ರ ಹಾಗೂ ಇತರೆ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ಪರಿಶೋಧನೆಗಾಗಿ ಹಾಜರುಪಡಿಸತಕ್ಕದ್ದು.
5. ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 18ರ ರೀತ್ಯ ನೇಮಕಾತಿ ಆದೇಶ ಹೊರಡಿಸಿದ 15 ದಿನಗಳೊಳಗಾಗಿ ಅಭ್ಯರ್ಥಿಯು ಸ್ಥಳ ನಿಯುಕ್ತಿಗೊಳಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಿ ನಿರ್ದೇಶಕರಿಗೆ ವರದಿ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 371 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 141 ಇಆತ 2004, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ದಿನಾಂಕ: 10.11.1999ರ ಅಧಿಸೂಚನೆ ಸಂಖ್ಯೆ: ಸಿಆಸುಇ 08 ಇಆತ 97 (ಭಾಗ) ರಲ್ಲಿ ಶ್ರೀ ಸೈಯದ್ ಅಹಮದ್ ಮುಜದದ್ದಿ, ಗಣಿತಶಾಸ್ತ್ರದ ಹಿರಿಯ ಶ್ರೇಣಿ ಉಪನ್ಯಾಸಕರು ಇವರನ್ನು ನಿಯೋಜನೆ ಮೇರೆಗೆ ಗುಲ್ಬರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಂಶುಪಾಲರಾಗಿ

ಪ್ರತಿನಿಯೋಜನೆ ಮೇರೆಗೆ ನೇಮಿಸಲಾಗಿದ್ದು, ಅವರನ್ನು ಅದೇ ಹುದ್ದೆಯಲ್ಲಿ ದಿನಾಂಕ: 17.11.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಇನ್ನೂ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಅನಸೂಯ**

ಪಿ.ಆರ್. 374

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕೃತೋಇ 21 ಕೃಪಬ 2004, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005

ಸರ್ಕಾರದ ಅಧಿಸೂಚನೆ ಸಂಖ್ಯೆ: ಕೃತೋಇ 21 ಕೃಪಬ 2004 ದಿನಾಂಕ: 29.9.2004 ರಲ್ಲಿ ಕೃಷಿ ಅಧಿಕಾರಿಗಳಿಗೆ ಸಹಾಯಕ ಕೃಷಿ ನಿರ್ದೇಶಕರ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ-32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ನೇಮಿಸಲಾದ ಈ ಕೆಳಕಂಡ ಅಧಿಕಾರಿಗಳಿಗೆ ಅವರ ಹೆಸರಿನ ಮುಂದೆ ತೋರಿಸಿರುವ ಸ್ಥಳಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಹಾಗೂ ಕಾರ್ಯನಿರ್ವಹಿಸುತ್ತಿರುವ ಸ್ಥಳ | ನೇಮಿಸಿದ ಸ್ಥಳ |
|---|---|---|
| 1 | ಎಸ್.ಬಿ. ಪಾಟೀಲ್, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಹುನಗುಂದ. | ಸಹಾಯಕ ಕೃಷಿ ನಿರ್ದೇಶಕರು (ವಿಷಯ ತಜ್ಞ) ಜಂಟಿ ನಿರ್ದೇಶಕರ ಕಛೇರಿ, ಬಾಗಲಕೋಟೆ (ಖಾಲಿ ಹುದ್ದೆಗೆ) |
| 2 | ಸಂಪಂಗಿ ರಾಮೇಗೌಡ, ಜಲಾನಯನ ಅಭಿವೃದ್ಧಿ ಇಲಾಖೆ, ಬಂಗಾರಪೇಟೆ. | ಸಹಾಯಕ ಕೃಷಿ ನಿರ್ದೇಶಕರು, (ತಾಂತ್ರಿಕ ಅಧಿಕಾರಿ) ಜಿಲ್ಲಾ ಜಲಾನಯನ ಅಭಿವೃದ್ಧಿ ಕಛೇರಿ, ಮೈಸೂರು. (ಖಾಲಿ ಹುದ್ದೆಗೆ) |
| 3 | ರಾಜಶೇಖರ ಎಸ್., ಕೃಷಿ ನಿರ್ದೇಶನಾಲಯ, ಬೆಂಗಳೂರು. | ಸಹಾಯಕ ಕೃಷಿ ನಿರ್ದೇಶಕರು, ಕೆ.ಆರ್. ನಗರ. (ಖಾಲಿ ಹುದ್ದೆಗೆ) |
| 4 | ಮಹದೇವಸ್ವಾಮಿ ಎಸ್., ಜಲಾನಯನ ಅಭಿವೃದ್ಧಿ ಇಲಾಖೆ, ನಂಜನಗೂಡು. | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಮೈಸೂರು. (ಖಾಲಿ ಹುದ್ದೆಗೆ) |
| 5 | ಲಕ್ಷ್ಮಣ ಎಸ್., ಜಲಾನಯನ ಅಭಿವೃದ್ಧಿ ಇಲಾಖೆ, ಚಿಕ್ಕಮಗಳೂರು. | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಶಿರಸಿ, (ಖಾಲಿ ಹುದ್ದೆಗೆ) |
| 6 | ಅವಲಕ್ಕಿ ಎ.ಕೆ., ಬೀಜ ಪರೀಕ್ಷಾ ಪ್ರಯೋಗಾಲಯ, ಗಂಗಾವತಿ. | ಸಹಾಯಕ ಕೃಷಿ ನಿರ್ದೇಶಕರು, ನವಲಗುಂದ. |
| 7 | ಶ್ರೀಧರರಾವ್, ಬೀಜೋತ್ಪಾದನಾ ಕೇಂದ್ರ, ಯಾದಗಿರಿ. | ಸಹಾಯಕ ಕೃಷಿ ನಿರ್ದೇಶಕರು, ಆಳಂದ್ (ಖಾಲಿ ಹುದ್ದೆಗೆ) |
| 8 | ಶ್ರಾಫ್ ರಘುನಾಥ್, ಜಂಟಿ ಕೃಷಿ ನಿರ್ದೇಶಕರ ಕಛೇರಿ, ಬಳ್ಳಾರಿ. | ಸಹಾಯಕ ಕೃಷಿ ನಿರ್ದೇಶಕರು, ಹೂವಿನ ಹಡಗಲಿ, (ಖಾಲಿ ಹುದ್ದೆಗೆ) |
| 9 | ಗೋಪ್ಯಾ ನಾಯಕ್ ಕೆ., ರೈತ ಸಂಪರ್ಕ ಕೇಂದ್ರ ನಾಗಲಮಡಿಕೆ, ಪಾವಗಡ ತಾಲ್ಲೂಕು. | ಸಹಾಯಕ ಕೃಷಿ ನಿರ್ದೇಶಕರು, ತುರುವೇಕೆರೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 375

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಆನಾಸ 88 ಆಇಸೇ 2004, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005

ನೇಮಕಾತಿ ನಿರೀಕ್ಷಣೆಯಲ್ಲಿರುವ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಡಿ. ಹೊಂಬಾಳೆ ಗೌಡ ಅವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರದೇ ಆದ ವೇತನ ಶ್ರೇಣಿಯಲ್ಲಿ ಕೊಡಗು ಜಿಲ್ಲಾ ಉಪ ನಿರ್ದೇಶಕರ ಹುದ್ದೆಗೆ (ಪ್ರಭಾರದಲ್ಲಿ) ಶ್ರೀ ಆರ್. ನಾರಾಯಣರೆಡ್ಡಿ ಅವರ ಸ್ಥಾನದಲ್ಲಿ ನೇಮಿಸಲಾಗಿದೆ. ಶ್ರೀ ಆರ್. ನಾರಾಯಣರೆಡ್ಡಿ ಅವರ ಸೇವೆಯನ್ನು ಮಾತೃ ಇಲಾಖೆಗೆ ಹಿಂದಿರುಗಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಜೇಂದ್ರ**

ಪಿ.ಆರ್. 376

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 24 ರಾಲೆಪ 2005, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2005**

ಶ್ರೀ ಪಿ.ಬಿ. ಶಂಕರಾನಂದಯ್ಯ, ಲೆಕ್ಕಪರಿಶೋಧನಾಧಿಕಾರಿ, ರಾಜ್ಯ ಲೆಕ್ಕಪತ್ರ ಇಲಾಖೆ, ಓಓಡಿ ಲೆಕ್ಕ ಪರಿಶೋಧನಾಧಿಕಾರಿ, ಯೋಜನಾಧಿಕಾರಿಗಳ ಕಛೇರಿ, ಸುಜಲಾ ಜಲಾನಯನ ಯೋಜನೆ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಖಾಲಿ ಇರುವ ಲೆಕ್ಕ ಪರಿಶೋಧನಾಧಿಕಾರಿ ಹುದ್ದೆಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪ್ರಭಾಕರ್**

ಪಿ.ಆರ್. 373 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಡಳಿತ).

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆನಾಸ 43 ಎಫ್‌ಪಿಪಿ 2005, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 129 ಆಸೇವ 2004, ದಿನಾಂಕ: 1.3.2005 ರನ್ವಯ ಶ್ರೀ ಯು.ಎಸ್. ನೆಜ್ಜೂರ್, ಅವರನ್ನು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಖಾಲಿ ಇರುವ ಜನರಲ್ ಮ್ಯಾನೇಜರ್ ಹುದ್ದೆಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎನ್. ಶಾಂತಕುಮಾರಿ**

ಪಿ.ಆರ್. 377 ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 35 ನಯೋಸೇ 2005, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ದಿನಾಂಕ: 4.2.2005ರ ಅಧಿಸೂಚನೆ ಸಂಖ್ಯೆ: ನಅಇ 145 ನಯೋಸೇ 2004, ಕ್ರಮ ಸಂಖ್ಯೆ: 5 ರಲ್ಲಿ ಶ್ರೀಮತಿ ವೀಣಾ ಮೋಹನ್ ಭೋಜ್, ಇವರನ್ನು ನಗರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ನಿಪ್ಪಾಣಿ, ಇಲ್ಲಿಗೆ ನೇಮಿಸಿದ ಆದೇಶವನ್ನು ಮಾರ್ಪಡಿಸಿ ಸದರಿಯವರನ್ನು ನಗರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಬೆಳಗಾಂ ಇಲ್ಲಿ ಖಾಲಿ ಇರುವ ಕಿರಿಯ ನಗರ ಯೋಜಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 378 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ನಅಇ 164 ನಯೋಸೇ 2003 (ಭಾಗ), ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಅಧಿಸೂಚನೆ ಸಂಖ್ಯೆ: ನಅಇ 164 ನಯೋಸೇ 2003 ದಿನಾಂಕ: 13.9.2004 ರಲ್ಲಿ 19 ಮಂದಿ ಕಿರಿಯ ನಗರ ಯೋಜಕರುಗಳಿಗೆ ದಿನಾಂಕ: 3.6.2004 ರಿಂದ ಪೂರ್ವಾನ್ವಯವಾಗಿ ಸಹಾಯಕ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಲಾಗಿತ್ತು.

ಕೆ.ಎ.ಟಿ. ಅರ್ಜಿ ಸಂಖ್ಯೆ: 671-677/2002 ದಿನಾಂಕ: 23.7.2004 ರಂದು ನ್ಯಾಯಾಲಯ ನೀಡಿರುವ ಆದೇಶದನ್ವಯ ಕಿರಿಯ ನಗರ ಯೋಜಕರ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 1.1.2000 ದಲ್ಲಿದ್ದಂತೆ ಪರಿಷ್ಕರಿಸಲಾಯಿತು. ಪರಿಷ್ಕರಿಸಿದ ಜ್ಯೇಷ್ಠತಾ ಪಟ್ಟಿಯಲ್ಲಿ ಶ್ರೀ ಹೆಚ್.ಎ. ಹಫೀಜ್ ಇವರು ಮುಂಬಡ್ತಿ ಹೊಂದಿದ ಇತರೆ ಕಿರಿಯ ನಗರ ಯೋಜಕರುಗಳಿಗಿಂತ ಜ್ಯೇಷ್ಠತೆಯಲ್ಲಿ ಹಿರಿಯರಾಗಿರುತ್ತಾರೆ.

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ಬಡ್ತಿ, ವೇತನ ಮತ್ತು ಕ್ರಮಬದ್ಧತೆ) 1978ರ ನಿಯಮ 2(3) ರನ್ವಯ ಸಹಾಯಕ ನಿರ್ದೇಶಕರ (ವೇತನ ಶ್ರೇಣಿ 7400-13120) ಹುದ್ದೆಗೆ ದಿನಾಂಕ: 3.6.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಶ್ರೀ ಹೆಚ್.ಎ. ಹಫೀಜ್, ಕಿರಿಯ ನಗರ ಯೋಜಕರು, ಸಹಾಯಕ ನಿರ್ದೇಶಕರ ಕಛೇರಿ, ತುಮಕೂರು ಇವರಿಗೆ ಮುಂಬಡ್ತಿ ನೀಡಿ ಶ್ರೀ ಜಯರಾಮಯ್ಯ (ಸಹಾಯಕ ಕಾರ್ಯಪಾಲಕ ಅಭಿಯಂತರರು) ಸಹಾಯಕ ನಿರ್ದೇಶಕರು, (ನಗರ ಯೋಜನೆ ಕೇಂದ್ರ) ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಇವರ ಮುಂಬಡ್ತಿಯಿಂದ ತೆರವಾಗಿರುವ ಖಾಲಿ ಹುದ್ದೆಗೆ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 379 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 06 ಆಸೇಇ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2005**

ಶ್ರೀ ಬಿ. ಸುರೇಂದ್ರನಾಥ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ, ಹಾಲಿ ಉಪಕಾರ್ಯದರ್ಶಿ, ಹೈದ್ರಾಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗ, ಇವರು ದಿನಾಂಕ: 11.10.2004 ರಿಂದ 04.01.2005 ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯಲ್ಲಿ ಈ ಕೆಳಕಂಡಂತೆ ಸಕ್ರಮಗೊಳಿಸಿ ಆದೇಶಿಸಲಾಗಿದೆ.

| | | |
|---|---|---|
| I. | ದಿನಾಂಕ: 11.10.2004 ರಿಂದ 6.12.2004 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮ 8(15) (ಎಫ್) ರನ್ವಯ ಕಡ್ಡಾಯ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿ. |
| II. | ದಿನಾಂಕ: 7.12.2004 ರಿಂದ 16.12.2004 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮ 76 ರನ್ವಯ ಸೇರುವಿಕೆ ಕಾಲ. |
| III. | ದಿನಾಂಕ: 17.12.2004 ರಿಂದ 4.1.2005 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮ 83ರ ಪ್ರಕಾರ ವೈದ್ಯಕೀಯ ಕಾರಣದ ಮೇರೆಗೆ ಗಳಿಕೆ ರಜೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 382

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 16 ಎಂಎಂಸಿ 2005, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2005**

ಬೆಂಗಳೂರು ವೈದ್ಯಕೀಯ ಕಾಲೇಜಿನ ಹೃದ್ರೋಗಶಾಸ್ತ್ರ ಪ್ರಾಧ್ಯಾಪಕರು ಹಾಗೂ ವಿಭಾಗ ಮುಖ್ಯಸ್ಥರಾದ ಡಾ: ಚಂದ್ರಕಾಂತ್ ಬಿ. ಪಾಟೀಲ್ ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 285(1) (ಎ) ಮತ್ತು (2)ನೇ ನಿಯಮದಡಿ ದಿನಾಂಕ: 28.02.2005ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸೇವೆಯಿಂದ ಸ್ವ-ಇಚ್ಛಾ ನಿವೃತ್ತರಾಗಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾಗರಾಜು**

ಪಿ.ಆರ್. 380

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 211 ಅಸೇಇ 2004, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಶ್ರೀ ಎಸ್.ವಿ. ಸೋಮಣ್ಣನವರ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ (ಹಾಲಿ ನಿವೃತ್ತ) ಇವರು ದಿನಾಂಕ: 01.09.2004 ರಿಂದ ದಿನಾಂಕ: 24.10.2004 ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 8(15) (ಎಫ್) ರನ್ವಯ ಕಡ್ಡಾಯ ನೇಮಕಾತಿ ನಿರೀಕ್ಷಣಾವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 381

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

### ಅಧಿಸೂಚನೆ

**ಸಂಖ್ಯೆ: ಸಿಆಸುಇ 13 ಆಸೇವ 2005, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**

ಶ್ರೀ ಬಿ.ಎಂ. ವಿಜಯಶಂಕರ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಾಲಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರ ಆಪ್ತಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು ಇವರು ದಿನಾಂಕ: 30.12.2004 ರಿಂದ 31.1.2005 ರವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, ಕರ್ನಾಟಕ ರಾಜ್ಯ ಹೆದ್ದಾರಿಗಳ ಅಭಿವೃದ್ಧಿ ಯೋಜನೆ, ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸಿರುವುದನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 66ರ ಪ್ರಕಾರ ಸಮವರ್ತಿತ ಪ್ರಭಾರದ ವ್ಯವಸ್ಥೆ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 383

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 17 ನಯೋಸೇ 2005, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005**

ದಿನಾಂಕ: 3.2.2005ರ ಅಧಿಸೂಚನೆ ಸಂಖ್ಯೆ: ನಅಇ 141 ನಯೋಸೇ 2004, ಕ್ರಮ ಸಂಖ್ಯೆ: 6 ನ್ನು ಭಾಗಶಃ ಮಾರ್ಪಡಿಸಿ, ಶ್ರೀ ಜಿ.ಎಸ್. ಜಯಸಿಂಹ, ಕಿರಿಯ ನಗರ ಯೋಜಕ ಇವರನ್ನು ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ ಇವರ ಕೋರಿಕೆ ಮೇರೆಗೆ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಖಾಲಿ ಇರುವ ಸಹಾಯಕ ಅಭಿಯಂತರ ಹುದ್ದೆಗೆ ಒಂದು ವರ್ಷ ಅವಧಿಗೆ ಮಾತ್ರ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 384

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಆನಾಸ 30 ಕಾಮಾಸೇ 2004, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005

ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ಸ್ಥಳ ನೇಮಕಾತಿ ಆದೇಶದ ನಿರೀಕ್ಷಣೆಯಲ್ಲಿದ್ದ ಈ ಮುಂದೆ ಕಾಣಿಸಿದ ಸಹಾಯಕ ನಿಯಂತ್ರಕರುಗಳಿಗೆ ಅವರ ಹೆಸರಿನ ಮುಂದೆ ತೋರಿಸಲಾದ ಹುದ್ದೆ ಮತ್ತು ಸ್ಥಳಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

| ಕ್ರ.ಸಂ. | ಅಧಿಕಾರಿಗಳ ಹೆಸರು/ಹುದ್ದೆ/ಸ್ಥಳ | ವರ್ಗಾವಣೆಗೊಂಡಿರುವ ಸ್ಥಳ/ಹುದ್ದೆ |
|---|---|---|
| 1 | ಶ್ರೀ ಎಂ.ಎಸ್. ರಾಮಯ್ಯ,<br>ಸಹಾಯಕ ನಿಯಂತ್ರಕರು, ನೇಮಕಾತಿ ನಿರೀಕ್ಷಣೆಯಲ್ಲಿ. | ಸಹಾಯಕ ನಿಯಂತ್ರಕರು, ಫ್ಲೈಯಿಂಗ್ ಸ್ಕ್ವಾಡ್-2, ಬೆಂಗಳೂರು.<br>(ಶ್ರೀ ಜಿ. ತಿಮ್ಮರಾಯಪ್ಪ ಅವರ ಸ್ಥಾನದಲ್ಲಿ) |
| 2 | ಶ್ರೀ ಈ. ಮಂಜುನಾಥ,<br>ಸಹಾಯಕ ನಿಯಂತ್ರಕರು, ನೇಮಕಾತಿ ನಿರೀಕ್ಷಣೆಯಲ್ಲಿ. | ಸಹಾಯಕ ನಿಯಂತ್ರಕರು, ದಾವಣಗೆರೆ.<br>(ಖಾಲಿ ಹುದ್ದೆಗೆ). |
| 3 | ಶ್ರೀ ಕೆ.ಎನ್. ಸೀತಾರಾಮಪ್ಪ,<br>ಸಹಾಯಕ ನಿಯಂತ್ರಕರು, ನೇಮಕಾತಿ ನಿರೀಕ್ಷಣೆಯಲ್ಲಿ. | ಸಹಾಯಕ ನಿಯಂತ್ರಕರು, ಚಿಕ್ಕಮಗಳೂರು.<br>(ಖಾಲಿ ಹುದ್ದೆಗೆ) |

**ವರ್ಗಾವಣೆ**

| ಕ್ರ.ಸಂ. | ಅಧಿಕಾರಿಗಳ ಹೆಸರು/ಹುದ್ದೆ/ಸ್ಥಳ | ವರ್ಗಾವಣೆಗೊಂಡಿರುವ ಸ್ಥಳ/ಹುದ್ದೆ |
|---|---|---|
| 1 | ಶ್ರೀ ಜಿ. ತಿಮ್ಮರಾಯಪ್ಪ,<br>ಸಹಾಯಕ ನಿಯಂತ್ರಕರು, ಫ್ಲೈಯಿಂಗ್ ಸ್ಕ್ವಾಡ್-2, ಬೆಂಗಳೂರು. | ಸಹಾಯಕ ನಿಯಂತ್ರಕರು, 3ನೇ ವೃತ್ತ, ಬೆಂಗಳೂರು<br>(ಶ್ರೀ ಕೆ.ಬಿ. ಕೃಷ್ಣಮೂರ್ತಿ ಅವರ ನಿವೃತ್ತಿಯಿಂದ ತೆರವಾದ ಸ್ಥಾನಕ್ಕೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಜೇಂದ್ರ**

ಪಿ.ಆರ್. 385

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಿಆಸುಇ 346 ಸಅಸೇ 2004, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005

ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಈ ಕೆಳಕಂಡ ಶಾಖಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 32 ರಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧೀನ ಕಾರ್ಯದರ್ಶಿ ಹುದ್ದೆಗಳಲ್ಲಿ ಸ್ವತಂತ್ರ ಪ್ರಭಾರದ ಮೇರೆಗೆ ಈ ಕೆಳಗಿನಂತೆ ಸ್ಥಳ ನಿಯುಕ್ತಿಗೊಳಿಸಿದೆ.-

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ನಿಯಮ 32 ರಡಿ ಸ್ಥಳನಿಯುಕ್ತಿಗೊಳಿಸಲಾದ ಹುದ್ದೆ : ಇಲಾಖೆ |
|---|---|---|
| 1 | ಶ್ರೀ ಕೆ. ನಾಗೇಶ್,<br>ಶಾಖಾಧಿಕಾರಿ, ಆರ್ಥಿಕ ಇಲಾಖೆ. | ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಐ.ಆರ್.ಎಲ್.ಎ) -<br>ಶ್ರೀ ಪಿ.ಬಿ. ರಾಮಚಂದ್ರಾಚಾರ್ ಇವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 2 | ಶ್ರೀ ಎಸ್.ಜಿ. ಸಂಪತ್‌ಕುಮಾರ್,<br>ಶಾಖಾಧಿಕಾರಿ, ನಗರಾಭಿವೃದ್ಧಿ ಇಲಾಖೆ. | ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ - ಶ್ರೀ ಜಗದೀಶ ಜೋಯ್ಸ್,<br>ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ. |
| 3 | ಶ್ರೀ ಹೆಚ್. ಶೇಖರಪ್ಪ,<br>ಶಾಖಾಧಿಕಾರಿ, ಸಿ.ಆ.ಸು.ಇ. (ಸಾಮಾನ್ಯ) | ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ - ಶ್ರೀಮತಿ ಬಿ. ಕಮಲಮ್ಮ<br>ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ |
| 4 | ಶ್ರೀಮತಿ ಸ್ವರ್ಣ ಲತ ಎಂ. ಭಂಡಾರಿ,<br>ಶಾಖಾಧಿಕಾರಿ, ಸಿ.ಆ.ಸು.ಇ. (ಸೇವೆಗಳು). | ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ -<br>ಶ್ರೀ ಎಫ್.ಆರ್. ಸಂಬರಗಿ ಇವರ ಸ್ಥಾನದಲ್ಲಿ. |

(1) ಈ ಅಧಿಕಾರಿಗಳು ನಿಯಮ 32 ರಡಿ ಸ್ಥಳನಿಯುಕ್ತಿಗೊಂಡ ಹುದ್ದೆಗಳಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(2) ಈ ಅಧಿಕಾರಿಗಳನ್ನು ದಿನಾಂಕ: 16.3.2005 ರೊಳಗೆ ಸಂಬಂಧಿಸಿದ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳು ಸದರಿ ಇಲಾಖೆಗಳ ಕರ್ತವ್ಯದಿಂದ ಬಿಡುಗಡೆಗೊಳಿಸತಕ್ಕದ್ದು.

(3) ದಿನಾಂಕ: 16.3.2005 ಕ್ಕಿಂತ ಮುಂಚೆ ಮೇಲೆ ಸ್ಥಳನಿಯುಕ್ತಿಗೊಳಿಸಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಅವರನ್ನು ದಿನಾಂಕ: 16.3.2005ರ ಅಪರಾಹ್ನದಿಂದ ಅವರ ಪ್ರಸಕ್ತ ಹುದ್ದೆಗಳಿಂದ ಬಿಡುಗಡೆಗೊಳಿಸಲಾಗಿದೆ ಎಂದು ಪರಿಗಣಿಸತಕ್ಕದ್ದು. ಹಾಗೂ ಅವರುಗಳು ದಿನಾಂಕ: 17.3.2005 ರಂದು ನಿಯಮ 32 ರಡಿ ಸ್ಥಳನಿಯುಕ್ತಿಗೊಳಿಸಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(4) ಖಾಲಿಯಾದ ಹುದ್ದೆಗಳಿಗೆ ಇಲಾಖೆಯ ಇತರ ಅಧಿಕಾರಿಗಳಿಗೆ ಸೂಕ್ತ ಪ್ರಭಾರ ವ್ಯವಸ್ಥೆ ಮಾಡತಕ್ಕದ್ದು.

**ಭಾಗ**

ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿದ ಈ ಕೆಳಕಂಡ ಅಧೀನ ಕಾರ್ಯದರ್ಶಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ಸೂಚಿಸಿದ ಹುದ್ದೆಗಳಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ/ಸ್ಥಳನಿಯುಕ್ತಿಗೊಳಿಸಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ವರ್ಗಾಯಿಸಿ / ಸ್ಥಳನಿಯುಕ್ತಿಗೊಳಿಸಿ ನೇಮಿಸಲಾದ ಹುದ್ದೆ : ಇಲಾಖೆ |
|---|---|---|
| 1 | ಶ್ರೀಮತಿ ಬಿ. ಕಮಲಮ್ಮ<br>ಅಧೀನ ಕಾರ್ಯದರ್ಶಿ, ನೇಮಕಾತಿ ನಿರೀಕ್ಷಣೆಯಲ್ಲಿ. | ಅಧೀನ ಕಾರ್ಯದರ್ಶಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ<br>ಇಲಾಖೆ - ಶ್ರೀಮತಿ ಪಿ. ಕೋಕಿಲ ಇವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ವರ್ಗಾಯಿಸಿ / ಸ್ಥಳನಿಯುಕ್ತಿಗೊಳಿಸಿ ನೇಮಿಸಲಾದ ಹುದ್ದೆ : ಇಲಾಖೆ |
|---|---|---|
| 2 | ಶ್ರೀ ಎಫ್.ಆರ್. ಸಂಬರಗಿ, ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ವರ್ಗಾವಣೆ ಆದೇಶದಲ್ಲಿರುವವರು. | ಇವರನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಶ್ರೀಮತಿ ಎಸ್. ವಿಶಾಲಾಕ್ಷಮ್ಮ ಇವರ ಸ್ಥಾನದಲ್ಲಿ ನೇಮಿಸಿರುವುದನ್ನು ಮಾರ್ಪಡಿಸಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಶ್ರೀ ಎನ್.ಎಲ್. ಹೋಟ್ಕರ್ ಇವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 3 | ಶ್ರೀಮತಿ ಎಸ್. ವಿಶಾಲಾಕ್ಷಮ್ಮ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆಗೆ ವರ್ಗಾವಣೆ ಆದೇಶದಲ್ಲಿರುವವರು. | ಇವರ ವರ್ಗಾವಣೆಯನ್ನು ರದ್ದುಪಡಿಸಿ ಸದರಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿಯೇ ಮುಂದುವರೆಸಲಾಗಿದೆ. |
| 4 | ಶ್ರೀ ಜಿ.ಎಸ್. ಗುರುಸಿದ್ದಯ್ಯ, ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಕಾರ್ಯಾಧ್ಯಯನ) | ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ವಿಶೇಷ ಕೋಶ) - ಶ್ರೀ ಪಿ.ಹೆಚ್. ಕೊಲ್ಹಾರ್, ಇವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 5 | ಶ್ರೀ ಜಗದೀಶ ಜೋಯ್ಸ್, ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ. | ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಗಣಿ) - ಶ್ರೀ ಎ.ಬಿ. ಸಿದ್ಧಾಂತಿ ಇವರ ಬಡ್ತಿಯಿಂದ ತೆರವಾದ ಸ್ಥಾನದಲ್ಲಿ. |

(1) ಈ ಅಧಿಕಾರಿಗಳು ವರ್ಗಾವಣೆ / ಸ್ಥಳನಿಯುಕ್ತಿಗೊಂಡ ಹುದ್ದೆಗಳಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(2) ಈ ಅಧಿಕಾರಿಗಳನ್ನು ದಿನಾಂಕ: 16.3.2005 ರೊಳಗೆ ಸಂಬಂಧಿಸಿದ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳು ಸದರಿ ಇಲಾಖೆಗಳ ಕರ್ತವ್ಯದಿಂದ ಬಿಡುಗಡೆಗೊಳಿಸತಕ್ಕದ್ದು.

(3) ದಿನಾಂಕ: 16.3.2005 ಕ್ಕಿಂತ ವರ್ಗಾವಣೆ / ಸ್ಥಳನಿಯುಕ್ತಿಗೊಂಡ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಅವರನ್ನು ದಿನಾಂಕ: 16.3.2005ರ ಅಪರಾಹ್ನದಿಂದ ಅವರ ಪ್ರಸಕ್ತ ಹುದ್ದೆಗಳಿಂದ ಬಿಡುಗಡೆಗೊಳಿಸಲಾಗಿದೆ ಎಂದು ಪರಿಗಣಿಸತಕ್ಕದ್ದು. ಹಾಗೂ ಅವರುಗಳು ದಿನಾಂಕ: 17.3.2005 ರಂದು ವರ್ಗಾವಣೆಗೊಂಡ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(4) ಖಾಲಿಯಾದ ಹುದ್ದೆಗಳಿಗೆ ಇಲಾಖೆಯ ಇತರ ಅಧಿಕಾರಿಗಳಿಗೆ ಸೂಕ್ತ ಪ್ರಭಾರ ವ್ಯವಸ್ಥೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 386

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಅಧಿಸೂಚನೆ

### ಸಂಖ್ಯೆ: ಸಿಆಸುಇ 73 ಸಅಸೇ 2005, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2005

ಅಧಿಸೂಚನೆ ಸಂಖ್ಯೆ: ಸಿಆಸುಇ 73 ಸಅಸೇ 2005, ದಿನಾಂಕ: 22.2.2005 ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಶ್ರೀಮತಿ ಬಿ. ಕಮಲಮ್ಮ, ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ (ಎ ಮತ್ತು ಬಿ ಶಾಖೆ) ಇವರನ್ನು ಶಿಕ್ಷಣ ಇಲಾಖೆಯಲ್ಲಿ ಶ್ರೀ ಕೆ.ಎಸ್. ವೇಣುಗೋಪಾಲ್, ಅಧೀನ ಕಾರ್ಯದರ್ಶಿ, (ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ) ಇವರ ಸ್ಥಾನಕ್ಕೆ ವರ್ಗಾಯಿಸಿ ನೇಮಿಸಿ ಹೊರಡಿಸಲಾದ ಆದೇಶವನ್ನು ಈ ಮೂಲಕ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 387

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಅಧಿಸೂಚನೆ

### ಸಂಖ್ಯೆ: ಸಿಆಸುಇ 29 ಇಆತ 2004, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005

ಮಂಗಳೂರು ಜಿಲ್ಲಾ ತರಬೇತಿ ಸಂಸ್ಥೆಯಲ್ಲಿ ಪ್ರಾಚಾರ್ಯರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೃಷ್ಣಮೂರ್ತಿ ಗೋಪಾಲ್, (ಭೂ ದಾಖಲೆಗಳ ಉಪ ನಿರ್ದೇಶಕರು) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪ್ರಾಚಾರ್ಯರುಗಳು, ಜಿಲ್ಲಾ ತರಬೇತಿ ಸಂಸ್ಥೆ, ಮಂಗಳೂರು ಹುದ್ದೆಯ ಕರ್ತವ್ಯದಿಂದ ಕಂದಾಯ ಇಲಾಖೆಯ ಕೋರಿಕೆಯ ಮೇರೆಗೆ ಬಿಡುಗಡೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಅನಸೂಯ**

ಪಿ.ಆರ್. 388

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಆಕುಕ 113 ಹೆಚ್ಎಸ್‌ಡಿ 2003, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2005

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 09.12.2003 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ 42(1)/98-99ರ ಪಟ್ಟಿಯಲ್ಲಿ ಗ್ರಾಮೀಣ ಕೃಪಾಂಕ ರಹಿತ ಆಯ್ಕೆಯಾದ ಪದವೀಧರ ದಂತ ವೈದ್ಯರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಂತ

ಆರೋಗ್ಯಾಧಿಕಾರಿಯಾಗಿ ರೂ.7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯ ಅಭ್ಯರ್ಥಿಯ ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೋಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ದಂತ ಆರೋಗ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ: ಜಿಲ್ಲಾ ಶಸ್ತ್ರ ಚಿಕಿತ್ಸಕರು ಶಸ್ತ್ರ ಚಿಕಿತ್ಸಕರ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು.

5. ಕ್ರಮ ಸಂಖ್ಯೆ: 1 ರಿಂದ 7 ರಲ್ಲಿನ ಅಭ್ಯರ್ಥಿಗಳು ಮೀಸಲಾತಿ ಆಧಾರದಲ್ಲಿ ಆಯ್ಕೆಯಾಗಿದ್ದು ಅವರುಗಳಿಗೆ ಸಂಬಂಧಿಸಿದಂತೆ ಸಿಂಧುತ್ವ ಪ್ರಮಾಣ ಪತ್ರವು ಸರ್ಕಾರಕ್ಕೆ ಸಕಾಲದಲ್ಲಿ ತಲುಪದಿರುವುದರಿಂದ ಸದರಿ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮುಂದೆ ತಮ್ಮ ಆಯ್ಕೆಗೆ ಸಂಬಂಧಪಟ್ಟಂತೆ ಸಿಂಧುತ್ವ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ಇಲ್ಲದಿದ್ದಲ್ಲಿ ನೇಮಕಾತಿ ಆದೇಶವು ರದ್ದುಗೊಳ್ಳುತ್ತದೆ.

6. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರು ಪಡಿಸಬೇಕು.

7. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ.

ಅಭ್ಯರ್ಥಿಯ ಜೇಷ್ಟತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ದತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ : ಜಿಲ್ಲಾ ಶಸ್ತ್ರ ಚಿಕಿತ್ಸಕ : ಶಸ್ತ್ರ ಚಿಕಿತ್ಸಕರು ಈಗ ನೇಮಕಾತಿ ಹೊಂದಿರುವ ವೈದ್ಯಾಧಿಕಾರಿಗಳ ಜನ್ಮ ದಿನಾಂಕಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ದೃಢೀಕೃತ ದಾಖಲಾತಿಗಳನ್ನು **ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಒಂದು ವಾರದೊಳಗಾಗಿ ಸಲ್ಲಿಸತಕ್ಕದ್ದು.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 113 ಹೆಚ್‌ಎಸ್‌ಡಿ 2003, ದಿನಾಂಕ: 03.03.2005ಕ್ಕೆ ಅನುಬಂಧ**

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ಮೀಸಲಾತಿ ಪ್ರವರ್ಗ | ನೇಮಕಾತಿ ನೀಡಲು ಸೂಚಿಸಿರುವ ಸ್ಥಳ |
|---|---|---|---|---|
| 1 | 2 | 3 | 4 | 5 |
| 1 | ಡಾ: ಜ್ಯೋತಿ ಡಿ., ತಂದೆ ದೇವೆಗೌಡ, # 8, ಗೋಕುಲ ನಿವಾಸ, ಬಜಾರ್ ಸ್ಟ್ರೀಟ್, ಆಡುಗೋಡಿ, ಬೆಂಗಳೂರು-30 | 25.11.1974 | III-(ಎ) (ಜಿ) | ಜನರಲ್ ಆಸ್ಪತ್ರೆ, ಪಾವಗಡ, ತುಮಕೂರು ಜಿಲ್ಲೆ. |
| 2 | ಡಾ: ನಲಬಂದ್ ಜಮೀರ್, ಡಾಟರ್ ಆಫ್ ಕುತುಬುದ್ದೀನ್, ಇಡಬ್ಲ್ಯೂಎಸ್ 92, ಅಶೋಕ ನಗರ, ಬೆಳಗಾಂ. | 22.12.1974 | II-(ಬಿ) (ಜಿ) | ಸಾರ್ವಜನಿಕ ಆಸ್ಪತ್ರೆ, ಖಾನಾಪುರ, ಬೆಳಗಾಂ ಜಿಲ್ಲೆ. |
| 3 | ಡಾ: ರಾಘವೇಂದ್ರ ಕೆ., ತಂದೆ: ಎನ್. ಕೃಷ್ಣೋಜಿರಾವ್, # 359, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು-79. | 14.11.1973 | II-(ಎ) (ಜಿ) | ಸಾರ್ವಜನಿಕ ಆಸ್ಪತ್ರೆ, ಹಳಿಯಾಳ, ಕಾರವಾರ ಜಿಲ್ಲೆ. |
| 4 | ಡಾ: ಜಯಂತಿ ಕೆ. ತಂದೆ: ಕನ್ನಾಭಿರಾಮ್ ಪಿ. # 627/1, 1ನೇ ಮಹಡಿ, 1ನೇ ಸ್ಟೇಜ್, 11ನೇ ರಸ್ತೆ, 2ನೇ ಮುಖ್ಯ ರಸ್ತೆ, ಇಂದಿರಾನಗರ, ಬೆಂಗಳೂರು-38. | 23.03.1971 | II-(ಎ) (ಜಿ) | ಸಾರ್ವಜನಿಕ ಆಸ್ಪತ್ರೆ, ನರಗುಂದ, ಗದಗ್ ಜಿಲ್ಲೆ. |
| 5 | ಡಾ: ರಶ್ಮಿ ಶೆಟ್ಟಿ, ಆನಂದ ನಿಲಯ, 1011-ಎ, 10ನೇ ಮುಖ್ಯ ರಸ್ತೆ, 3ನೇ ಸ್ಟೇಜ್, 2ನೇ ಬ್ಲಾಕ್, ಬಸವೇಶ್ವರ ನಗರ, ಬೆಂಗಳೂರು-79. | 26.07.1974 | II-(ಎ) (ಎಫ್) | ಸಾರ್ವಜನಿಕ ಆಸ್ಪತ್ರೆ, ಎಕ್ಸಾಂಬಾ, ಬೆಳಗಾಂ ಜಿಲ್ಲೆ. |

| 1 | 2 | 3 | 4 | 5 |
|---|---|---|---|---|
| 6 | ಡಾ: ರಘುನಂದನ್ ಪಿ,<br># 41, ಲಕ್ಷ್ಮಿ ನಿವಾಸ, ಭಾಗೀರಥಿ ನಗರ, 7ನೇ ಬ್ಲಾಕ್,<br>4ನೇ ಘಟಕ, 3ನೇ ಸ್ಟೇಜ್, ಬನಶಂಕರಿ,<br>ಬೆಂಗಳೂರು-85 | 28.03.1975 | ಪ.ಜಾ (ಜಿ) | ಸಾರ್ವಜನಿಕ ಆಸ್ಪತ್ರೆ, ಅಥಣಿ,<br>ಬೆಳಗಾಂ ಜಿಲ್ಲೆ. |
| 7 | ಡಾ: ವಿಜಯಲಕ್ಷ್ಮಿ ಎ. ತಂದೆ: ರಾಘವಲು ಎ.ವಿ.,<br># 7/111/97, ಉತ್ತರ ಬ್ಲಾಕ್ ಡೋಣಿ ಮಲೈ,<br>ಟಿ.ಎಸ್. ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ. | 19.06.1975 | ಪ.ಜಾ (ಎಫ್) | ಸಾರ್ವಜನಿಕ ಆಸ್ಪತ್ರೆ, ಗೋಕಾಕ್,<br>ಬೆಳಗಾಂ ಜಿಲ್ಲೆ. |

**ಸಿ.ಎಸ್. ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 389 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಇಂಧನ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ: ಇಎನ್ 43 ಇಇಬಿ 2005, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005

ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪೆನಿ ನಿಯಮಿತದ ನಿವೇದನಾ ಹಾಗೂ ಸಂಘ ನಿಯಮಾವಳಿ ಪತ್ರದ ಆರ್ಟಿಕಲ್ 74(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಯಕ್‌ವಾಡಿ, ತಾಂತ್ರಿಕ ನಿರ್ದೇಶಕರು, ಗುಲ್ಬರ್ಗಾ ಇವರನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪೆನಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರನ್ನಾಗಿ, ಶ್ರೀ ಎ.ಕೆ. ಮೊನ್ನಪ್ಪ, ವ್ಯವಸ್ಥಾಪಕ ನಿರ್ದೇಶಕರು, ಜೆಸ್ಕಾಂ, ಗುಲ್ಬರ್ಗಾ ಇವರ ಸ್ಥಾನದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಪಿ.ಆರ್. 393 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ: ಸಿಆಸುಇ 180 ಸಅಸೇ 2004, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2005

ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿರುವ ಕೆಳಕಂಡ ಸರ್ಕಾರದ ಅಧೀನ ಕಾರ್ಯದರ್ಶಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ.10620-14960ರ ವೇತನ ಶ್ರೇಣಿಯ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ ನೇಮಿಸಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ಉಪಕಾರ್ಯದರ್ಶಿಯಾಗಿ ಬಡ್ತಿ ಮೇಲೆ ಸ್ಥಳ ನಿಯುಕ್ತಿಗೊಳಿಸಲಾದ ಹುದ್ದೆ |
|---|---|---|
| | **ಶ್ರೀ:ಶ್ರೀಮತಿ:** | |
| 1 | ಶ್ರೀ ಎ.ಬಿ. ಸಿದ್ಧಾಂತಿ,<br>ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ<br>ಇಲಾಖೆ (ಗಣಿ). | ಸರ್ಕಾರದ ಉಪಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ -<br>ಶ್ರೀ ಬಿ. ರಾಮಸ್ವಾಮಿ ಇವರ ನಿವೃತ್ತಿಯಿಂದ ತೆರವಾದ ಸ್ಥಾನದಲ್ಲಿ. |
| 2 | ಶ್ರೀ ಜಿ.ಎನ್. ಲಕ್ಷ್ಮೀಪತಿ,<br>ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ<br>ಇಲಾಖೆ (ಕಾನೂನು ಕೋಶ) | ಸರ್ಕಾರದ ಉಪಕಾರ್ಯದರ್ಶಿ, ಕಾರ್ಮಿಕ ಇಲಾಖೆ -<br>ಶ್ರೀ ಕೆ. ಲಕ್ಷ್ಮೀಕಾಂತ್ ಇವರ ಸ್ಥಾನದಲ್ಲಿ. |

(1) ಬಡ್ತಿ ಹೊಂದಿದ ಅಧಿಕಾರಿಗಳು ಬಡ್ತಿ ಹೊಂದಿದ ಹುದ್ದೆಗಳಲ್ಲಿ ಕೂಡಲೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(2) ಬಡ್ತಿ ಹೊಂದಿದ ಅಧಿಕಾರಿಗಳನ್ನು ದಿನಾಂಕ: 16.3.2005 ರೊಳಗೆ ಸಂಬಂಧಿಸಿದ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿಗಳು ಸದರಿ ಇಲಾಖೆಗಳ ಕರ್ತವ್ಯದಿಂದ ಬಿಡುಗಡೆಗೊಳಿಸತಕ್ಕದ್ದು.

(3) ದಿನಾಂಕ: 16.3.2005 ಕ್ಕಿಂತ ಮುಂಚೆ ಬಡ್ತಿ ಹೊಂದಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ಅವರನ್ನು ದಿನಾಂಕ: 16.3.2005ರ ಅಪರಾಹ್ನದಿಂದ ಅವರ ಪ್ರಸಕ್ತ ಹುದ್ದೆಗಳಿಂದ ಬಿಡುಗಡೆಗೊಳಿಸಲಾಗಿದೆ ಎಂದು ಪರಿಗಣಿಸತಕ್ಕದ್ದು. ಹಾಗೂ ಅವರುಗಳು ದಿನಾಂಕ: 17.3.2005 ರಂದು ಬಡ್ತಿ ಹೊಂದಿದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(4) ಖಾಲಿಯಾದ ಹುದ್ದೆಗಳಿಗೆ ಇಲಾಖೆಯ ಇತರ ಅಧಿಕಾರಿಗಳಿಗೆ ಸೂಕ್ತ ಪ್ರಭಾರ ವ್ಯವಸ್ಥೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್. 394 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)